# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1370
ಸದಸ್ಯರ ಹೆಸರು :ಶ್ರೀ ಹೆಚ್.ಎಂ.ರಮೇಶ್ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : **09.03.2022.**
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಈವರೆಗೆ ಒತ್ತುವರಿಯಾಗಿರುವ ಗೋಮಾಳಗಳ ಸಂಖ್ಯೆ ಎಷ್ಟು; ಒತ್ತುವರಿಯಾದ ಗೋಮಾಳಗಳನ್ನು ಹಿಂಪಡೆಯಲಾಗಿದೆಯೇ ಹಾಗೂ ಒತ್ತುವರಿದಾರರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು) | ರಾಜ್ಯದಲ್ಲಿ ಒತ್ತುವರಿಯಾಗಿರುವ ಗೋಮಾಳ ಜಮೀನಿನ ಒಟ್ಟು ವಿಸ್ತೀರ್ಣ 286582-36.11 ಎಕರೆ/ಗುಂಟೆ.<br><br>ಗೋಮಾಳ ಜಮೀನುಗಳಲ್ಲಿ ರೈತರು ಅನಧಿಕೃತ ಸಾಗುವಳಿ ಮಾಡುತ್ತಿದ್ದು ಸಕ್ರಮೀಕರಣಕ್ಕಾಗಿ ನಮೂನೆ-50, 53 ಹಾಗೂ 57ರಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಸದರಿ ಅರ್ಜಿಗಳು ತಿರಸ್ಕೃತಗೊಂಡಲ್ಲಿ ಒತ್ತುವರಿ ಗೋಮಾಳವನ್ನು ಸರ್ಕಾರದ ವಶಕ್ಕೆ ಪಡೆಯಲಾಗುತ್ತಿದೆ.<br><br>ಸರ್ಕಾರಿ ಜಮೀನಿನ ಒತ್ತುವರಿ ಪ್ರಕರಣಗಳನ್ನು ಸಮರ್ಥವಾಗಿ ತಡೆಯುವ ಸಲುವಾಗಿ ಕರ್ನಾಟಕ ಭೂ ಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯವನ್ನು ರಚಿಸಲಾಗಿದೆ. ಒತ್ತುವರಿದಾರರ ವಿರುದ್ಧ ಕರ್ನಾಟಕ ಭೂ ಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯದಲ್ಲಿ ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 192ಎ ರನ್ವಯ ಪ್ರಕರಣವು ದಾಖಲಿಸಲಾಗುತ್ತಿದೆ.<br><br>ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 20 ಎಲ್‌ಜಿಪಿ 2020, ದಿ: 20.01.2020 ರಂತೆ ಸರ್ಕಾರಿ ಜಮೀನು ಒತ್ತುವರಿ ತೆರವುಗೊಳಿಸುವುದು, ಒತ್ತುವರಿದಾರರ ವಿರುದ್ಧ ಕ್ರಮ ಜರುಗಿಸುವುದು, ಒತ್ತುವರಿ ತೆರವುಗೊಳಿಸಲು ವಿಫಲರಾಗಿರುವ ಅಧಿಕಾರಿಗಳು / ಭೂ ಕಬಳಿಕೆಗೆ ಪ್ರೇರಣೆ ನೀಡಲು, ನಕಲಿ ದಾಖಲೆಗಳನ್ನು ಸೃಷ್ಟಿಸಲು ಸಹಕರಿಸಿ ಶಾಮೀಲಾಗಿರುವ ಅಧಿಕಾರಿ/ಸಿಬ್ಬಂದಿಗಳ ವಿರುದ್ಧ ಕಾನೂನು/ಶಿಸ್ತು ಕ್ರಮಗಳನ್ನು ಜರುಗಿಸಲು ಸೂಚನೆ ನೀಡಲಾಗಿದೆ. |

-----2

| | | |
|---|---|---|
| ಆ) | ರಾಜ್ಯದ ಬಹುತೇಕ ತಾಲ್ಲೂಕು ಕಚೇರಿಗಳಲ್ಲಿ ರೈತರ ಆರ್.ಟಿ.ಸಿ. ಯಲ್ಲಿ ಬೆಳೆ ನೋಂದಾವಣೆ, ಪಹಣಿ ನೋಂದಾವಣೆ ಮುಂತಾದ ಕಾರ್ಯಗಳು ಸುಸೂತ್ರವಾಗಿ ಆಗುತ್ತಿಲ್ಲ ಎನ್ನುವ ದೂರುಗಳು ಕೇಳಿ ಬರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ; | ಪ್ರಸ್ತುತ ಬೆಳೆ-ಸಮೀಕ್ಷೆ ತಂತ್ರಾಂಶದ (Crop-Survey) ಮುಖಾಂತರ ಸ್ವೀಕೃತವಾಗುವ ಆಯಾ ಋತುಮಾನದ ಬೆಳೆ ವಿವರಗಳನ್ನು ನಿಗದಿತ ಕಾಲಮಿತಿಯಲ್ಲಿ ಪಹಣಿಯಲ್ಲಿ ಇಂಡೀಕರಿಸಲಾಗುತ್ತಿದೆ. |
| ಇ) | ತಾಲ್ಲೂಕು ಕಚೇರಿಯ ಭೂಮಿ ಕೇಂದ್ರವನ್ನು ಖಾಸಗಿ ನಿರ್ವಹಣೆಗೆ ಕೊಡಬೇಕು ಅನ್ನುವ ಆಗ್ರಹ ಕೇಳಿ ಬಂದಿರುವ ಕುರಿತು ಸರ್ಕಾರದ ನಿಲುವೇನು; | ಇಂತಹ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಈ) | ತಾಲ್ಲೂಕು, ಹೋಬಳಿ ಕೇಂದ್ರಗಳ ವ್ಯಾಪ್ತಿಯಲ್ಲಿ ಜಮೀನುಗಳ ಸರ್ವೆ ಕಾರ್ಯ ಸಮರ್ಪಕವಾಗಿ ನಡೆಯುತ್ತಿಲ್ಲ ಎನ್ನುವ ಆರೋಪಗಳು ಕೇಳಿ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸರ್ವೆ ಅಧಿಕಾರಿಗಳ ನೇಮಕಾತಿ ಪ್ರಕ್ರಿಯೆ ಪ್ರಸ್ತುತ ಯಾವ ಹಂತದಲ್ಲಿದೆ? | ಭೂ ಮಾಪನ ಇಲಾಖೆಯಲ್ಲಿ ಅಳತೆಗೆ ಸಂಬಂಧಿಸಿದ ಎಲ್ಲಾ ಅರ್ಜಿಗಳನ್ನು ಮೋಜಣಿ ವ್ಯವಸ್ಥೆಯಡಿ ಸ್ವೀಕರಿಸಲಾಗುತ್ತಿದೆ. FIFO (First in First out) ಆಧಾರದ ಮೇಲೆ ಗಣಕೀಕೃತ ವ್ಯವಸ್ಥೆಯಡಿಯಲ್ಲಿ Automatic ಆಗಿ ಭೂ ಮಾಪಕರಿಗೆ ಅಳತೆ ಕಾರ್ಯವನ್ನು ಹಂಚಿಕೆ ಮಾಡಲಾಗುತ್ತಿದೆ. ಅಳತೆ ನಂತರ FIFO ಆಧಾರದ ಮೇಲೆ ಅಪ್ ಲೋಡ್ ಮಾಡಿ ಅನುಮೋದನೆ ನೀಡಲಾಗುತ್ತಿದೆ. ನಿರ್ದಿಷ್ಟವಾದ ಆರೋಪಗಳು ಕೇಳಿಬಂದಲ್ಲಿ ಪರಿಶೀಲಿಸಿ ಅಗತ್ಯ ಕ್ರಮವಹಿಸಲಾಗುತ್ತಿದೆ.<br><br>ಖಾಲಿ ಇರುವ ಭೂ ದಾಖಲೆಗಳ ಸಹಾಯಕ ನಿರ್ದೇಶಕರುಗಳ ಹುದ್ದೆಗಳ ಪೈಕಿ ನೇರ ನೇಮಕಾತಿಯಿಂದ ಭರ್ತಿ ಮಾಡಬೇಕಾದ 32 ಹುದ್ದೆಗಳನ್ನು ಹಾಗೂ 700 ಭೂ ಮಾಪಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಆರ್ಥಿಕ ಇಲಾಖೆಯ ಸಹಮತಿಯನ್ನು ಕೋರಲಾಗಿರುತ್ತದೆ. |

ಸಂಖ್ಯೆ: ಆರ್‌ಡಿ 76 ಎಲ್‌ಜಿಕ್ಯೂ 2022

(ಆರ್.ಅಶೋಕ)
ಕಂದಾಯ ಸಚಿವರು